# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1257 |
| ಸದಸ್ಯರ ಹೆಸರು | : | ಶ್ರೀ ಕೆ.ಹರೀಶ್ ಕುಮಾರ್<br>(ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : | 17-03-2021. |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು,<br>ಲೋಕೋಪಯೋಗಿ ಇಲಾಖೆ |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಿಂದ ಆರಂಭಗೊಳ್ಳುವ ಚಾರ್ಮಾಡಿ ಘಾಟ್‌ನಲ್ಲಿ ರಸ್ತೆ ದುರಸ್ತಿ ಕಾರಣದಿಂದಾಗಿ ಬಸ್ಸು ಹಾಗೂ ಸರಕು ವಾಹನಗಳ ಸಂಚಾರಕ್ಕೆ ಪ್ರಸ್ತುತ ನಿಷೇಧವಿದ್ದು ರಸ್ತೆ ದುರಸ್ತಿ ಕಾಮಗಾರಿ ನಿಧಾನಗತಿಯಲ್ಲಿ ಸಾಗುತ್ತಿದ್ದು, ಸದರಿ ರಸ್ತೆ ದುರಸ್ತಿ ಕಾಮಗಾರಿಯನ್ನು ತ್ವರಿತವಾಗಿ ಮುಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು: (ಸಂಪೂರ್ಣ ವಿವರ ನೀಡುವುದು) | ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯಿಂದ ಆರಂಭಗೊಳ್ಳುವ ಚಾರ್ಮಾಡಿ ಘಾಟ್‌ನಲ್ಲಿ ರಸ್ತೆ ದುರಸ್ತಿ ಕಾರಣದಿಂದಾಗಿ ಬಸ್ಸು ಹಾಗೂ ಸರಕು ಸಾಗಾಣೆ ವಾಹನಗಳ ಸಂಚಾರಕ್ಕೆ ದಿನಾಂಕ:14-08-2019 ರಿಂದ ನಿಷೇಧವಿರುತ್ತದೆ. ರಾಷ್ಟ್ರೀಯ ಹೆದ್ದಾರಿ-73ರ ಕಿ.ಮೀ.75.00 (ಚಾರ್ಮಡಿ) ಯಿಂದ ಕಿ.ಮೀ.99.200 (ಕೊಟ್ಟಿಗೆಹಾರ) ದವರೆಗೆ ಚಾರ್ಮಡಿ ಘಾಟ್ ಭಾಗದ ರಸ್ತೆಯಲ್ಲಿ ರೂ.9.92 ಕೋಟಿಗಳ ಮರು ಡಾಂಬರೀಕರಣ ಕಾಮಗಾರಿಗೆ 2019-20ನೇ ಸಾಲಿನಲ್ಲಿ ಮಂಜೂರಾತಿ ದೊರೆತಿದ್ದು, ಕಾಮಗಾರಿಯು ಪೂರ್ಣಗೊಂಡಿರುತ್ತದೆ.<br><br>ಮುಂದುವರೆದು, 2018ನೇ ಸಾಲಿನಲ್ಲಿ ಮುಂಗಾರಿನ ಅವಧಿಯಲ್ಲಿ ಸುರಿದ ಭಾರಿ ಮಳೆಯಿಂದ ಉಂಟಾದ ಅತಿವೃಷ್ಟಿಯಿಂದ ಸುಮಾರು ಆರು ಕಡೆಗಳಲ್ಲಿ ರಸ್ತೆಯ ಹಳ್ಳದ ಬದಿಯಲ್ಲಿ ಕುಸಿತ ಉಂಟಾಗಿ ರಸ್ತೆಗೆ ತೀವ್ರತರವಾದ ಹಾನಿ ಉಂಟಾಗಿರುತ್ತದೆ. ಸದರಿ ಜಾಗಗಳಲ್ಲಿ ಹಳ್ಳದ ಕಡೆ ರಸ್ತೆಯ ಬದಿಗೆ ತಾತ್ಕಾಲಿಕ ತಡೆಗೋಡೆ ನಿರ್ಮಿಸಿ ಗುಡ್ಡದ ಬದಿ ರಸ್ತೆಯನ್ನು ಅಗಲೀಕರಿಸಿ ಡಾಂಬರೀಕರಣ ಮಾಡಲಾಗಿರುತ್ತದೆ.<br><br>ಸದರಿ ರಸ್ತೆಯ ಹಳ್ಳದ ಬದಿಯಲ್ಲಿ ಕುಸಿತ ಉಂಟಾಗಿದ್ದ ಭಾಗಗಳನ್ನು ಶಾಶ್ವತವಾಗಿ ಅಭಿವೃದ್ಧಿಪಡಿಸಲು ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ರೂ.19.36 ಕೋಟಿಗಳ ಅಂದಾಜು ಪಟ್ಟಿಗೆ ಜಾಬ್ ನಂ.NH-73-KNT-2019-20-90ರನ್ವಯ ದಿನಾಂಕ:18.03.2020 ರಂದು ಮಂಜೂರಾತಿ ದೊರೆತಿರುತ್ತದೆ. ಸದರಿ ಕಾಮಗಾರಿಯ 1, 2 ಮತ್ತು 3ನೇ ಟೆಂಡರ್ ಕರೆಯಲ್ಲಿ ಭಾಗವಹಿಸಿದ್ದ ಗುತ್ತಿಗೆದಾರರು ಅರ್ಹತೆ ಪಡೆಯದ ಕಾರಣ, ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಭಾರೀ ವಾಹನಗಳ ಸಂಚಾರಕ್ಕೆ ಅನುಮತಿ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಎಂದಿನಿಂದ ಅನುಮತಿ ನೀಡಲಾಗುವುದು? (ವಿವರ ನೀಡುವುದು) | ಪ್ರಸ್ತುತ, ಮರು ಡಾಂಬರೀಕರಣ ಕಾಮಗಾರಿ ಪೂರ್ಣಗೊಂಡಿದ್ದು, ರಸ್ತೆ ಸುರಕ್ಷತಾ ಪರಿಕರಗಳಾದ ಎಡ್ಜ್‌ಲೈನ್ ಮಾರ್ಕಿಂಗ್, ರಸ್ತೆ ಸುರಕ್ಷತಾ ಫಲಕಗಳು, ತೀವ್ರತರವಾದ ತಿರುವುಗಳಿರುವ ಕಡೆ ರಂಬ್ಲರ್ ಸ್ಟ್ರಿಪ್ಸ್, ಕ್ಯಾಟ್ ಐಸ್ ಹಾಗೂ ಹಳ್ಳದ ಬದಿ ತಡೆಗೋಡೆಗೆ ರಿಫ್ಲೆಕ್ಟರ್ ಡೆಲಿನೇಟರ್, ತಿರುವುಗಳಿಗೆ ಚವರಾನ್ ಫಲಕಗಳನ್ನು ಅಳವಡಿಸಲಾಗಿದ್ದು, ಕೆ.ಎಸ್.ಆರ್.ಟಿ.ಸಿ. ಬಸ್‌ಗಳು, ಆರು ಚಕ್ರದ ಲಾರಿಗಳನ್ನೊಳಗೊಂಡಂತೆ ಎಲ್ಲಾ ವಿಧದ ಲಘುವಾಹನ, ಲಘು ವಾಣಿಜ್ಯ ವಾಹನಗಳ ಸಂಚಾರಕ್ಕೆ ದಿನದ 24 ಘಂಟೆಯೂ ಅನುವು ಮಾಡಿಕೊಡಬಹುದಾಗಿರುತ್ತದೆ. ಈ ಸಂಬಂಧ ಆದೇಶ ಹೊರಡಿಸಲು ಕೋರಿ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರುರವರಿಗೆ ರಾಷ್ಟ್ರೀಯ ಹೆದ್ದಾರಿ ವಲಯದ ವತಿಯಿಂದ ದಿನಾಂಕ:08.03.2021ರಲ್ಲಿ ವರದಿ ಸಲ್ಲಿಸಲಾಗಿರುತ್ತದೆ. |

ಕಡತ ಸಂಖ್ಯೆ: ಲೋಇ 97 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು
ಲೋಕೋಪಯೋಗಿ ಇಲಾಖೆ